# ಸವಾಲಿನ ಪ್ರದೇಶಗಳಲ್ಲಿ ಶಿಕ್ಷಣ ನೀತಿಗಳು

ಶಾಶ್ವತೀ ಪಯಕ್

೨೦೦೯ರ ಶಿಕ್ಷಣ ಹಕ್ಕು ಕಾಯ್ದೆಯ (Right to Education (RTE) Act 2009) ಪ್ರಕಾರ ಭಾರತದಲ್ಲಿ ೬ರಿಂದ ೧೪ರ ವಯೋಮಿತಿಯ ಪ್ರತಿ ಮಗುವೂ ಉಚಿತ ಹಾಗು ಕಡ್ಡಾಯ ಶಿಕ್ಷಣಕ್ಕೆ ಅರ್ಹವಾಗಿದೆ. ಮಗು ತನ್ನ ೬ನೇ ವರ್ಷದಲ್ಲಿ ಒಂದನೆಯ ತರಗತಿಯಲ್ಲಿ ಇದೆಯೆಂದಾದರೆ, ಅದು ಒಂಬತ್ತನೇ ತರಗತಿಗೆ ಬರುವ ವೇಳೆಗೆ ೧೪ ವಯಸ್ಸಾಗಿರುತ್ತದೆ. ನಡುವಿನ ಈ ೮ ವರ್ಷಗಳು ಉಚಿತ ಮತ್ತು ಕಡ್ಡಾಯ ಶಿಕ್ಷಣದ ಜೊತೆಗೆ ಮಗು, ಪುಸ್ತಕ, ಸಮವಸ್ತ್ರ ಹಾಗು ಮಧ್ಯಾಹ್ನದ ಬಿಸಿಯೂಟವನ್ನು ಶಾಲೆ ನಡೆಯುವ ಅಷ್ಟೂ ದಿನ ಸರ್ಕಾರದ ವತಿಯಿಂದ ಪುಕ್ಕಟೆಯಾಗಿ ಪಡೆಯಬಹುದು ಹಾಗು ಯಾವುದೇ ಶಾಲಾ ಶುಲ್ಕವನ್ನು ಪಾವತಿಸಬೇಕಾಗುವುದಿಲ್ಲ. ರಾಜ್ಯದಿಂದ ರಾಜ್ಯಕ್ಕೆ ಈ ನೀತಿಯು ಮಾರ್ಪಾಡಿಗೆ ಒಳಗಾಗುತ್ತದಾದರೂ, ಸಾಮಾನ್ಯವಾಗಿ ಮೇಲೆ ತಿಳಿಸಿದ ಎಲ್ಲವೂ ಸರ್ಕಾರದಿಂದ ಲಭ್ಯವಾಗುವ ಸಮಾನ ಸೌಲಭ್ಯಗಳಾಗಿವೆ. ಮಾಧ್ಯಮಿಕ ಹಂತವನ್ನು ತಲುಪುವ ವೇಳೆಗೆ ಮಗುವಿಗಾಗಿ ಭರಿಸಬೇಕಿರುವ ವೆಚ್ಚ ಹೆಚ್ಚಾಗಿ, ಹೆಚ್ಚಿನ ಮೊತ್ತವನ್ನು ಪೋಷಕರು ಭರಿಸಬೇಕೆಂದು ಸರ್ಕಾರ ಅಪೇಕ್ಷಿಸುತ್ತದೆ. ಇದರಿಂದ ಮಗುವು ಶಾಲೆ ತೊರೆಯುವ ಅಪಾಯಕ್ಕೆ ಈಡಾಗಬಹುದು, ಇದರೊಂದಿಗೆ ಬಡತನ, ಅಗತ್ಯದ ಸಂಪನ್ಮೂಲಗಳು ದೊರಯದೇ ಇರುವುದು, ಶಾಲಾ ಪ್ರವೇಶಾಧಿಕಾರದ ಸಮಸ್ಯೆ, ಶಾಲೆಯಲ್ಲಿ ಶಿಕ್ಷಕರ ವರ್ತನೆ ಹಾಗು ಸಮಾಜದಲ್ಲಿನ ಸಾಂಪ್ರದಾಯಿಕ ಆಚರಣೆಗಳೂ ಮಗುವನ್ನು ನಿರ್ಬಂಧಿಸಿದರೆ ಈ ಅಪಾಯವು ಇನ್ನೂ ಗುರುತರವಾಗಬಹುದು.

**ಜಟಿಲತೆಯಿಂದ ಕೂಡಿದ ಸವಾಲುಗಳು**

ನೈಸರ್ಗಿಕ ಪ್ರಕೋಪ ಹಾಗು ಸಶಸ್ತ್ರ ಸಂಗ್ರಾಮಗಳಿಗೆ ತುತ್ತಾಗಿರುವ ಕ್ಷೇತ್ರಗಳಂತಹ ಸವಾಲಿನ ಭೌಗೋಳಿಕ ಹಾಗು ರಾಜಕೀಯ ಸನ್ನಿವೇಶಗಳಲ್ಲಿ ಪರಿಸ್ಥಿತಿಯು ಇನ್ನೂ ಜಟಿಲದ್ದಾಗಿರುತ್ತದೆ. ಇಷ್ಟೇ ಅಲ್ಲದೆ, ರಸ್ತೆ ಸಂಪರ್ಕದ ತೊಂದರೆಗೆ ಸಿಲುಕುವ ಪ್ರದೇಶಗಳೂ ಇವೆ. ಇಂತಹ ಕೆಲವು ಪ್ರದೇಶಗಳಲ್ಲಿ ಒಳ್ಳೆಯ ವ್ಯವಸ್ಥೆ ಇರುವ ವಿರಳ ಉದಾಹರಣೆಗಳಿದ್ದರೂ, ಈ ಸವಾಲುಗಳು ನೀತಿ ರಚನಾಕಾರರ ಹಾಗು ಅವುಗಳನ್ನು ಕಾರ್ಯಗತಗೊಳಿಸುವವರ ಗಮನವನ್ನು ಎಷ್ಟು ಅವಶ್ಯಕತೆಯಿದೆಯೋ ಅಷ್ಟು ಸೆಳೆಯುವುದು ವಿರಳ. ಈ ಪ್ರದೇಶಗಳಲ್ಲಿ ಶಾಲೆ ತೊರೆಯಲು ಇರುವ ಕಾರಣಗಳು ಸಂಕೀರ್ಣ ಸ್ವರೂಪದಾಗಿದ್ದು, ಸದಾ ಬಡತನಕ್ಕೆ ಸಂಬಂಧಿಸಿರಬೇಕೆಂದೇನೂ ಇಲ್ಲ. ನಾನು ವೈಯಕ್ತಿಕವಾಗಿ ಭೇಟಿ ಇತ್ತು ಸ್ಥೂಲ ಪರಿಚಯ ಪಡೆದಿರುವ ಕೆಲವು ಪ್ರದೇಶಗಳ ಶಾಲೆಗಳಿಗೆ ಸಂಬಂಧಪಟ್ಟ ಸವಾಲುಗಳನ್ನು ಹಾಗು ನೀತಿಗಳನ್ನು ಇಲ್ಲಿ ಚರ್ಚಿಸಲು ಬಯಸುತ್ತೇನೆ. ನಾವಿಲ್ಲಿ ಗಮನವನ್ನು ಕೇಂದ್ರೀಕರಿಸುವ ಪ್ರದೇಶಗಳೆಂದರೆ: ೧) ಉತ್ತರಾಖಂಡದ ಉತ್ತರಕಾಶಿ ೨) ರಾಜಸ್ಥಾನದ ಬರ್ಮೇರ್ ಹಾಗು ೩) ಛತ್ತಿಸಘಡದ ದಾಂತೇವಾಡಾ.

ನೈಸರ್ಗಿಕ ಪ್ರಕೋಪಗಳ ನೇರ ಪರಿಣಾಮಗಳಲ್ಲಿ ಕೆಲವೆಂದರೆ: (i) ಶಾಲಾ ಕಟ್ಟಡಗಳ ನಾಶ (ii) ಜನವಸತಿಯೊಂದಿಗೆ ಶಾಲೆಯ ಸಂಪರ್ಕ ಏರ್ಪಡಿಸುವ ರಸ್ತೆಗಳಿಗೆ ಹಾನಿ ಒದಗಿದ್ದು, ಅವು ಮತ್ತೆ ತೆರವುಗೊಳ್ಳಲು ಹಿಡಿಯುವ ಕಾಲಾವಕಾಶದ ಬಗ್ಗೆಗಿನ ಅನಿಶ್ಚಿತತೆ ಹಾಗು ತತ್ಪರಿಣಾಮವಾದ ಅನಿಯಮಿತ ಹಾಜರಿಯಿಂದ ಕಲಿಕಾ–ಪ್ರಕ್ರಿಯೆಯ ಮೇಲೆ ಆಗುವ ಪರಿಣಾಮ. ಶಾಲಾ ಕಟ್ಟಡವನ್ನು ನಿರಾಶ್ರಿತರ ವಸತಿಗಾಗಿ ಬಳಸಬೇಕಾಗಿ ಬರುವುದರಿಂದ ದೀರ್ಘಕಾಲ ಶಾಲೆಯನ್ನು ಮುಚ್ಚುವ ಪ್ರಸಂಗ, ಸ್ಥಳಾಂತರಗೊಂಡ

ಕಾರಣದಿಂದಾಗಿಯೋ ಅಥವಾ ವಲಸೆ ಹೋಗಬೇಕಾದ ಕಾರಣದಿಂದಾಗಿಯೋ ಸಂಕಷ್ಟದಲ್ಲಿರುವ ಕುಟುಂಬಗಳ ಮಕ್ಕಳು ಶಾಲೆಯಿಂದ ಹೊರಗುಳಿಯುವ ಕಾರಣದಿಂದಾಗಿ ಉಂಟಾಗುವ ಬಾಲ ಕಾರ್ಮಿಕ ಸಮಸ್ಯೆ, ಬಾಲ್ಯವಿವಾಹ ಹಾಗು ಮಕ್ಕಳ ಮಾರಾಟದಂತಹ ಅನಿಷ್ಟಗಳು ಪರೋಕ್ಷ ಪರಿಣಾಮಗಳ ಪಟ್ಟಿಗೆ ಸೇರುತ್ತವೆ. ಇದರಿಂದಾಗಿ ಈ ಮಕ್ಕಳು ನಿರೀಕ್ಷಿತ ಕಲಿಕಾ–ಫಲಿತಾಂಶಗಳಲ್ಲಿ ತಮ್ಮ ಜೊತೆಗಾರರಿಗಿಂತ ಅನೇಕ ವರ್ಷಗಳಷ್ಟು ಹಿಂದೆ ಬೀಳಬಹುದು. ಅವರು ಶಾಲಾವ್ಯವಸ್ಥೆಯಿಂದ ಹೊರಗುಳಿಯುವುದನ್ನು ಕೇವಲ ಬಡತನ ಅಥವಾ ಪೋಷಕರ ಮೌಢ್ಯದ ಪರಿಣಾಮವೆಂದು ವ್ಯಾಖ್ಯಾನಿಸಲಾಗದು. ಅದರ ಬೇರುಗಳು ಇನ್ನೂ ಆಳಕ್ಕೆ ಇಳಿಯುತ್ತವೆ.

## ಪ್ರತಿಕೂಲ ಸ್ವಾಭಾವಿಕ ಸನ್ನಿವೇಶಗಳಲ್ಲಿ ಶಾಲಾಕಲಿಕೆ

ಭಾರತೀಯ ಉಪಖಂಡದ ಸರಿಸುಮಾರು ಶೇಕಡಾ ೮೫ರಷ್ಟು ಭೂಭಾಗವು ಹಲವು ರೀತಿಯ ನೈಸರ್ಗಿಕ ಪ್ರಕೋಪಗಳಿಗೆ ತುತ್ತಾಗುತ್ತದೆ. ದೇಶದ ೨೨ ರಾಜ್ಯಗಳಲ್ಲಿ ಹಲವು ರೀತಿಯ ಹಾನಿಗಳಿಗೆ ಒಳಗಾಗಬಹುದಾದ ಪ್ರದೇಶಗಳಿವೆ. ಈ ಕೆಳಗಿನ ಕೋಷ್ಟಕವು ಇದರ ಸ್ಥೂಲಚಿತ್ರಣ ನೀಡುತ್ತದೆ:

**ಪ್ರದೇಶ ಹಾಗು ಆಪತ್ತಿನ ಸ್ವರೂಪ ಪ್ರದೇಶ ಹಾಗು ಆಪತ್ತಿನ ಸ್ವರೂಪ ೨೦೦೯ರ ವಿಪತ್ತು ನಿರ್ವಹಣಾ ರಾಷ್ಟ್ರೀಯ ನೀತಿಯ ಪ್ರಕಾರ ಹಾನಿಗೆ ಒಳಗಾಗಬಹುದೆಂದು ಅಂದಾಜಿಸಲಾದ ಭೂಪ್ರದೇಶ ೨೦೦೯ರ ವಿಪತ್ತು ನಿರ್ವಹಣಾ ರಾಷ್ಟ್ರೀಯ ನೀತಿಯ ಪ್ರಕಾರ ಹಾನಿಗೆ ಒಳಗಾಗಬಹುದೆಂದು ಅಂದಾಜಿಸಲಾದ ಭೂಪ್ರದೇಶ ೨೦೦೯ರ ವಿಪತ್ತು ನಿರ್ವಹಣಾ ರಾಷ್ಟ್ರೀಯ ನೀತಿಯ ಪ್ರಕಾರ ಹಾನಿಗೆ ಒಳಗಾಗಬಹುದೆಂದು ಅಂದಾಜಿಸಲಾದ ಭೂಪ್ರದೇಶ ಪ್ರದೇಶ ಹಾಗು ಆಪತ್ತಿನ ಸ್ವರೂಪ ೨೦೦೯ರ ವಿಪತ್ತು ನಿರ್ವಹಣಾ ರಾಷ್ಟ್ರೀಯ ನೀತಿಯ ಪ್ರಕಾರ ಹಾನಿಗೆ ಒಳಗಾಗಬಹುದೆಂದು ಅಂದಾಜಿಸಲಾದ ಭೂಪ್ರದೇಶ**

ಭೂಕಂಪಕ್ಕೆ ಒಳಗಾಗಬಹುದಾದ ಪ್ರದೇಶಗಳು ಭೂಕಂಪಕ್ಕೆ ಒಳಗಾಗಬಹುದಾದ ಪ್ರದೇಶಗಳು ಶೇಕಡಾ ೫೮.೬ ಶೇಕಡಾ ೫೮.೬ ರಷ್ಟು ಭೂಭಾಗ ಶೇಕಡಾ ೫೮.೬ ರಷ್ಟು ಭೂಭಾಗ ಭೂಕಂಪಕ್ಕೆ ಒಳಗಾಗಬಹುದಾದ ಪ್ರದೇಶಗಳು ಶೇಕಡಾ ೫೮.೬ ರಷ್ಟು ಭೂಭಾಗ

ಪ್ರವಾಹ, ನದಿಕೊರೆತಕ್ಕೆ ತುತ್ತಾಗಬಹುದಾದ ಭೂಮಿಪ್ರವಾಹ, ನದಿಕೊರೆತಕ್ಕೆ ತುತ್ತಾಗಬಹುದಾದ ಭೂಮಿಭೂಪ್ರದೇಶದ ಶೇಕಡಾ ಭೂಪ್ರದೇಶದ ಶೇಕಡಾ ೧೨ ಪ್ರವಾಹ, ನದಿಕೊರೆತಕ್ಕೆ ತುತ್ತಾಗಬಹುದಾದ ಭೂಮಿಭೂಪ್ರದೇಶದ ಶೇಕಡಾ ೧೨

ಬರಪೀಡಿತ ಪ್ರದೇಶ ಬರಪೀಡಿತ ಪ್ರದೇಶ ಶೇಕಡಾ ೬೮ಶೇಕಡಾ ೬೮ರಷ್ಟು ವ್ಯವಸಾಯಯೋಗ್ಯ ಭೂಮಿ ಬರಪೀಡಿತ ಪ್ರದೇಶ ಶೇಕಡಾ ೬೮ರಷ್ಟು ವ್ಯವಸಾಯಯೋಗ್ಯ ಭೂಮಿ

ಚಂಡಮಾರುತ ಹಾಗು ಸುನಾಮಿಗಳು ಅಪ್ಪಳಿಸಬಹುದಾದ ಕರಾವಳಿ ಪ್ರದೇಶ ಚಂಡಮಾರುತ ಹಾಗು ಸುನಾಮಿಗಳು ಅಪ್ಪಳಿಸಬಹುದಾದ ಕರಾವಳಿ ಪ್ರದೇಶ ಒಟ್ಟು ೭೫೧೬ ಕಿಮೀ ಉದ್ದದ ಕರಾವಳಿ ಪ್ರದೇಶದಲ್ಲಿ ೫೭೦೦ಒಟ್ಟು ೭೫೧೬ ಕಿಮೀ ಉದ್ದದ ಕರಾವಳಿ ಪ್ರದೇಶದಲ್ಲಿ ೫೭೦೦ ಕಿಮೀ. ಒಟ್ಟು ೭೫೧೬ ಕಿಮೀ ಉದ್ದದ ಕರಾವಳಿ ಪ್ರದೇಶದಲ್ಲಿ ೫೭೦೦ ಕಿಮೀ. ಚಂಡಮಾರುತ ಹಾಗು ಸುನಾಮಿಗಳು ಅಪ್ಪಳಿಸಬಹುದಾದ ಕರಾವಳಿ ಪ್ರದೇಶ ಒಟ್ಟು ೭೫೧೬ ಕಿಮೀ ಉದ್ದದ ಕರಾವಳಿ ಪ್ರದೇಶದಲ್ಲಿ ೫೭೦೦ ಕಿಮೀ.

(ಮೂಲ: *National Policy on Disaster Management 2009)*

## ಉತ್ತರಕಾಶಿಯಲ್ಲಿನ ವಾಸ್ತವ ಚಿತ್ರಣ (ಉತ್ತರಾಖಂಡ)

ಉತ್ತರಾಖಂಡ ರಾಜ್ಯದ ಒಟ್ಟು ಭೂಪ್ರದೇಶದ ಶೇಕಡಾ ೮೬ರಷ್ಟು ಭಾಗವು ಭೂಕಂಪನಕ್ಕೆ ಒಳಗಾಗಬಹುದಾದ ಬೆಟ್ಟಗಳಿಂದ ಕೂಡಿದ್ದು, ಈ ಪ್ರದೇಶವು ಪ್ರವಾಹ, ಕ್ಷಿಪ್ರಪ್ರವಾಹ (flash flood), ಭೂಕುಸಿತ ಹಾಗು ಕುಂಭದ್ರೋಣ ಮಳೆಗಳಿಗೆ ಪಕ್ಕಾಗುತ್ತದೆ. (ಉತ್ತರಾಖಂಡ ಸರ್ಕಾರ, ೨೦೧೫ ಹಾಗು ದಾಸ್, ೨೦೧೩). ಉತ್ತರಕಾಶಿ ಜಿಲ್ಲೆಯು ಉತ್ತರಾಖಂಡದ ಉತ್ತರದ ಅಂಚಿನಲ್ಲಿದ್ದು ಅದರಿಂದ ಉತ್ತರಕ್ಕೆ ಹಿಮಾಚಲಪ್ರದೇಶ ರಾಜ್ಯವೂ, ಈಶಾನ್ಯಕ್ಕೆ ಚೀನಾ ಭೂಭಾಗವೂ ಇವೆ. ೨೦೧೩ರಲ್ಲಿ ಈ ಜಿಲ್ಲೆಯು ರುದ್ರಪ್ರಯಾಗದ ಕ್ಷಿಪ್ರಪ್ರವಾಹಕ್ಕೆ ತುತ್ತಾಗಿ ಅತಿ ಹೆಚ್ಚು ಹಾನಿ ಅನುಭವಿಸಿತ್ತು. ಇಲ್ಲಿನ ಆರು ಆಡಳಿತ ವಿಭಾಗಗಳಲ್ಲಿ ಅತಿ ಹೆಚ್ಚಿನ ಹಾನಿಗೆ

ಒಳಗಾಗಿದ್ದುದು ಭಟವಾಡಿ. ಉತ್ತರಾಖಂಡ ಸರ್ಕಾರದ ಕೋರಿಕೆಯ ಮೇರೆಗೆ ಭಾರತೀಯ ಭೂವೈಜ್ಞಾನಿಕ ಸಮೀಕ್ಷೆಯ (Geological Survey of India -GSI) ಭೂವಿಜ್ಞಾನಿಗಳ ತಂಡವು ಭಟವಾಡಿ, ಡುಂಡಾ ಹಾಗು ಬರಕೋಟ್ ತಾಲೂಕುಗಳ ಇಪ್ಪತ್ತು ಗ್ರಾಮಗಳಲ್ಲಿ ಈ ಪ್ರವಾಹದಿಂದ ಆದ ಹಾನಿಯ ಪ್ರಮಾಣವನ್ನು, ಅದಕ್ಕೆ ಕಾರಣೀಭೂತ ಅಂಶಗಳನ್ನು ಹಾಗು ಅಲ್ಪಕಾಲಿಕ ಹಾಗು ದೀರ್ಘಕಾಲಿಕ ಪರಿಹಾರದ ಕ್ರಮಗಳನ್ನು ನಿಗದಿಮಾಡಲು ಭೂತಾಂತ್ರಿಕ ಅಧ್ಯಯನ (geotechnical assessment) ಕೈಗೊಂಡಿತು.

ಈ ಸಮೀಕ್ಷೆಯು, ಹದಿನಾರು ಗ್ರಾಮಗಳು ತೀವ್ರಹಾನಿಗೆ ಒಳಗಾಗಿವೆಯೆಂದೂ, ಅವುಗಳಲ್ಲಿ ಹನ್ನೊಂದು ಗ್ರಾಮಗಳ ವಸತಿಗಳನ್ನು ಭಾಗಶಃ ಬೇರೆಡೆಗೆ ಸ್ಥಳಾಂತರಿಸಬೇಕಿದೆ ಎಂದೂ ತಿಳಿಸಿತು. ೨೦೧೩ರ ನವೆಂಬರ್-ಡಿಸೆಂಬರ್ ತಿಂಗಳಲ್ಲಿ ಭಟವಾಡಿ ವಿಭಾಗದ ಕೆಲವು ಶಾಲೆಗಳನ್ನು ಕುರಿತು ಕೈಗೊಂಡ ಅಧ್ಯಯನವು ಈ ಕೆಳಗಿನ ಅಂಶಗಳನ್ನು ಹೊರಗೆಡಹಿತು:

(i) ಶಾಲೆಗಳಿಗೆ ಮುಖ್ಯರಸ್ತೆಯಿಂದ ರಸ್ತೆ ಸಂಪರ್ಕ, ಸಾರಿಗೆ ವ್ಯವಸ್ಥೆ, ಆರೋಗ್ಯ ಸೌಕರ್ಯ, ಅಂಚೆಕಛೇರಿ, ಶೈಕ್ಷಣಿಕ ಸವಲತ್ತುಗಳು, ವಾಣಿಜ್ಯ ಕೇಂದ್ರ, ದೂರವಾಣಿ ಸಂಪರ್ಕ, ಸಾಮಾನ್ಯ ಸಾರ್ವಜನಿಕ ಸೌಲಭ್ಯಗಳು ಹಾಗು ಸಮುದ್ರಮಟ್ಟದಿಂದ ಈ ಶಾಲೆಗಳು ಇರುವ ಎತ್ತರಗಳನ್ನು ಗಮನದಲ್ಲಿರಿಸಿ A ಇಂದ Fವರೆಗಿನ ಮೂಲ್ಯಾಂಕನ ನೀಡುವ ಮೂಲಕ ಶಾಲೆಗಳ ವರ್ಗೀಕರಣ ಮಾಡಿತು. ಉತ್ತರಕಾಶಿಯ ಅನೇಕ ಶಾಲೆಗಳು ಮುಖ್ಯರಸ್ತೆಯಿಂದ ಬಹು ದೂರದಲ್ಲಿದ್ದು, ಭೂಪ್ರದೇಶವು ಹಳ್ಳ-ತಿಟ್ಟುಗಳಿಂದ ಕೂಡಿದ್ದು, ಶಾಲೆಗಳನ್ನು ತಲುಪುವುದೇ ಒಂದು ದೊಡ್ಡ ಸವಾಲಾಗಿದೆ. ಸಂಪರ್ಕಸೌಲಭ್ಯದ ಕೊರತೆಯಿರುವ ಶಾಲೆಗಳಲ್ಲಿ ಪಾಠಮಾಡಲು ಶಿಕ್ಷಕರ ಹಿಂಜರಿಯುವಿಕೆಯೇ ಹಲವು ಏಕಶಿಕ್ಷಕ ಶಾಲೆಗಳು ಅಸ್ತಿತ್ವದಲ್ಲಿರುವುದಕ್ಕೆ ಮುಖ್ಯ ಕಾರಣಗಳಲ್ಲಿ ಒಂದಾಗಿದೆ.ಶಿಕ್ಷಣ ವಿಭಾಗದ ಅಂದಾಜಿನ ಪ್ರಕಾರ, ೨೦೧೩ರ ಪ್ರವಾಹದಲ್ಲಿ ಹಾನಿಗೊಳಗಾದ ೨೯ ಶಾಲೆಗಳಲ್ಲಿ ಮೂರು ಶಾಲೆಗಳು ಸಂಪೂರ್ಣ ನಾಶಗೊಂಡು, ೨೬ ಶಾಲೆಗಳು ಗೋಡೆ, ಛಾವಣಿ ಹಾಗು ಗೇಟ್ ಕುಸಿತ, ಕುಡಿಯುವ ನೀರಿನ ಸೌಲಭ್ಯದ, ಶೌಚಾಲಯಗಳ, ತರಗತಿ ಕೊಠಡಿಗಳ ಹಾನಿ ಇವೇ ಮೊದಲಾದ ನಷ್ಟಗಳನ್ನು ಅನುಭವಿಸಿದವು. ನೈಸರ್ಗಿಕ ಪ್ರಕೋಪಗಳು ಅಡಿಗಡಿಗೆ ಘಟಿಸುತ್ತಿದ್ದರೂ ಈ ಶಾಲೆಗಳು ಹಾನಿಯ ತೀವ್ರತೆಯನ್ನು ತಗ್ಗಿಸಲು ಯಾವುದೇ ವ್ಯವಸ್ಥಿತ ಯೋಜನೆಯನ್ನು ಹಾಕಿಕೊಂಡಿಲ್ಲ.

(ii) ಭಾರತೀಯ ಭೂವೈಜ್ಞಾನಿಕ ಸಮೀಕ್ಷೆಯ ವರದಿ ತಿಳಿಸುವಂತೆ, ಭಾಗೀರಥಿ ನದಿಯ ಹೂಳಿನ ಪ್ರಮಾಣದಲ್ಲಿ ಹೆಚ್ಚಳ, ಅವ್ಯವಸ್ಥಿತ ಕಟ್ಟಡ ನಿರ್ಮಾಣ ಹಾಗು ಅಪರ್ಯಾಪ್ತ ರಕ್ಷಣಾ ವಿಧಾನಗಳು ಬಹಳಷ್ಟು ಜಾಗಗಳಲ್ಲಿ ಸನ್ನಿವೇಶವನ್ನು ಬಿಗಡಾಯಿಸಿವೆ. ಈ ಕ್ಷೇತ್ರದಲ್ಲಿ ಕೈಗೊಳ್ಳಲಾದ ಸಮೀಕ್ಷೆಯ ಸಮಯದಲ್ಲಿ ನಾವು ಗಮನಿಸಿದ ಅಂಶಗಳೂ ಇವೇ ಆಗಿವೆ.

**ಉತ್ತರಾಖಂಡ ರಾಜ್ಯದಲ್ಲಿ ನೀತಿ ಉಪಕ್ರಮಗಳು ಹಾಗು ಸರ್ಕಾರ ಕೈಗೊಂಡಿರುವ ಉತ್ತಮ ಕ್ರಮಗಳು**

ಸಂದರ್ಭಗಳ ವಿಶೇಷತೆಗೆ ಅನುಗುಣವಾಗಿ ಕೈಗೊಂಡ ನೀತಿ ಉಪಕ್ರಮಗಳು ಹಾಗು ಕ್ರಮಗಳ ಕೆಲವು ಸಾಕ್ಷ್ಯಾಧಾರಗಳು ಗಮನಕ್ಕೆ ಬಂದಿದ್ದು, ಮೆಚ್ಚುಗೆ ವ್ಯಕ್ತವಾಗಬೇಕಿರುವ ಆ ಕ್ರಮಗಳೆಂದರೆ:

೧. ಮಕ್ಕಳ ಶಿಕ್ಷಣವು ಅಡಚಣೆಯಿಲ್ಲದೆ ನಿರಂತರವಾಗಿ ಸಾಗುವಂತೆ ನೋಡಿಕೊಳ್ಳಲು ರಾಜ್ಯ ಸರ್ಕಾರವು ಕೆಲವು ವಿಶೇಷ ಕ್ರಮಗಳನ್ನು ಕೈಗೊಂಡಿದೆ. ಇಲ್ಲಿ ಬೆಟ್ಟಗಳ ಮೇಲೆ ವರ್ಷಕ್ಕೆ ಮೂರು ತಿಂಗಳು ಹಿಮಪಾತವಾಗುವುದರಿಂದ ಆ ಭಾಗಗಳಲ್ಲಿ ವಾಸಿಸುವ ಜನರು ಕಣಿವೆಗಳಿಗೆ ವಾಸ್ತವ್ಯ ಬದಲಿಸುವ ಅನಿವಾರ್ಯತೆಯಿದ್ದು, ಕಣಿವೆಯಲ್ಲಿನ ಶಾಲೆಗಳಲ್ಲಿ ಘಟ್ಟದ ಮೇಲಿನ ಜನರ ಮಕ್ಕಳ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಡಲಾಗುತ್ತದೆ. ಹೆಚ್ಚು ಎತ್ತರದಲ್ಲಿರುವ ಶಾಲೆಗಳೂ, ಅಲ್ಲಿನ ಋತುಮಾನ ಹಾಗು ವಾತಾವರಣಕ್ಕೆ ಅನುಗುಣವಾಗಿ, ಚಳಿಗಾಲದಲ್ಲಿ ದೀರ್ಘ ರಜೆಯನ್ನೂ, ಬೇಸಿಗೆಯಲ್ಲಿ ಅಲ್ಪರಜೆಯನ್ನೂ ಘೋಷಿಸುವ ಮೂಲಕ ತಮ್ಮ

ಶೈಕ್ಷಣಿಕ ಕ್ಯಾಲೆಂಡರಿನಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳನ್ನು ಮಾಡಿಕೊಳ್ಳುತ್ತವೆ.

೨. ಉತ್ತರಕಾಶಿಯಲ್ಲಿನ "ಜಿಲ್ಲಾ ವಿಪತ್ತು ನಿರ್ವಹಣಾ ಕಚೇರಿ"ಯು (District Disaster Management Office- DDMO) ಆಡಳಿತ ಯಂತ್ರದ ಹಲವು ವಿಭಾಗಗಳಿಗೆ ತಾಂತ್ರಿಕ ಸಹಾಯ ನೀಡುತ್ತಾ, ಸಲಹೆಗಾರನ ಪಾತ್ರ ವಹಿಸುತ್ತದೆ. ೨೦೧೩ರ ಪ್ರವಾಹದಲ್ಲಿ ಹಾನಿಗೊಳಗಾದ ಮನೆಗಳ ಪುನರ್‌ನಿರ್ಮಾಣವು ಮುಗಿದ ಬಳಿಕ, ಶಾಲಾಕಟ್ಟಡಗಳೂ ಸೇರಿದಂತೆ, ಎಲ್ಲಾ ಸಾರ್ವಜನಿಕ ಕಟ್ಟಡಗಳ ಪರಿಶೀಲನೆಗೆ ಈ ಕಚೇರಿಯು ಮುಂದಾಗಿದೆ.

೩. ರಸ್ತೆಯನ್ನು ಸಮತಟ್ಟು ಹಾಗು ರಿಪೇರಿ ಮಾಡಲು ಬಳಸಲಾಗುವ ಬುಲ್ ಡೋಜರ್ ಯಂತ್ರಗಳನ್ನು ಮುಖ್ಯರಸ್ತೆಯಲ್ಲಿ ನಿಯಮಿತ ದೂರಗಳಲ್ಲಿ ನಿಲುಗಡೆ ಮಾಡುವಂತೆ ಆದೇಶ ನೀಡಿ, ರಸ್ತೆಗಳು ಬೇಗ ದುರಸ್ತಿಯಾಗುವಂತೆ ಕಾಲಕಾಲಕ್ಕೆ ಅವುಗಳ ಉಸ್ತುವಾರಿಯನ್ನು ಗಮನಿಸಲಾಗುತ್ತದೆ.

೪. ಉತ್ತರ ಕಾಶಿಯಲ್ಲಿನ ಮತ್ತೊಂದು ವಿಶೇಷತೆಯೆಂದರೆ ಸಕ್ರಿಯ ಸರ್ಕಾರೇತರ ಸಂಸ್ಥೆಗಳ ಸಂಪರ್ಕ ಜಾಲ. ಇದು ಮಾಡಿದ ಕೆಲಸವನ್ನೇ ಮತ್ತೊಮ್ಮೆ ಮಾಡದಂತೆ ಎಚ್ಚರವಹಿಸುವಲ್ಲಿ ಹಾಗು ಸಮುದಾಯಗಳಿಗೆ ಸಮಯೋಚಿತ ಸಹಾಯಹಸ್ತ ನೀಡುವಲ್ಲಿ ಪರಿಣಾಮಕಾರಿಯಾಗಿದೆ. ಈ ಸರ್ಕಾರೇತರ ಸಂಸ್ಥೆಗಳಾದರೋ ಹಳ್ಳಿಗಳಲ್ಲಿ ಹಾಗು ಶಾಲೆಗಳಲ್ಲಿ ವಿಪತ್ತು ನಿರ್ವಹಣೆ ಕುರಿತು ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸುವ, ರೈತರಿಗೆ ವ್ಯವಸಾಯ ಹಾಗು ಜೀವನೋಪಾಯಗಳಿಗೆ ಸಂಬಂಧಿಸಿದ ಅಂಶಗಳ ಬಗ್ಗೆ ಪರಿಣತರ ಸಲಹೆಗಳನ್ನು ತಲುಪಿಸುವ, ಕಚ್ಚಾ ವಸ್ತುಗಳನ್ನು ಹಾಗು ಉತ್ಪನ್ನಗಳನ್ನು ಕೊಳ್ಳುವ ಹಾಗು ಮಾರಾಟಮಾಡುವ ಸಹಕಾರ ಸಂಘಗಳಂತೆ ಬಹಳಷ್ಟು ಕ್ಷೇತ್ರಗಳಲ್ಲಿ ಕಾರ್ಯನಿರತವಾಗಿವೆ.

೫. ನೆಹರೂ ಪರ್ವತಾರೋಹಣ ಸಂಸ್ಥೆಯು (Nehru Institute of Mountaineering - NIM) ಹೊಸ ರಸ್ತೆಗಳಿಗೆ ಕಾಲುದಾರಿಗಳನ್ನು ನಿರ್ಮಿಸಿಕೊಡುವ ಹಾಗು ಹಳ್ಳಿಗಳ ತರುಣ ಸ್ವಯಂ-ಸೇವಕರಿಗೆ ತುರ್ತುಪರಿಸ್ಥಿತಿಗಳಲ್ಲಿ ಮೊದಲು ಸಹಾಯಕ್ಕಾಗಿ ಸ್ಪಂದಿಸುವವರಲ್ಲಿ ಮೊದಲಿಗರಾಗುವ ಬಗ್ಗೆ ತರಬೇತಿ ನೀಡುತ್ತಿದೆ.

**ರಾಜಸ್ಥಾನದ ಗ್ರಾಮೀಣ ಬಾರ್ಮೇರ್ ಭಾಗದ ಸಾರ್ವಜನಿಕ ಶಾಲೆಗಳು**

ಚೀನಾ ಗಡಿಯ ರಾಜ್ಯದ ಬಳಿಕ ಪಾಕಿಸ್ತಾನದ ಗಡಿ ರಾಜ್ಯ ರಾಜಸ್ಥಾನದ ಬಾರ್ಮೇರ್ ಜಿಲ್ಲೆಯನ್ನು ನೋಡೋಣ. ಈ ಜಿಲ್ಲೆಯಲ್ಲಿ ಎಂಟು ವಿಭಾಗಗಳು, ಎರಡು ಪುರಸಭೆಗಳು, ೩೮೦ ಗ್ರಾಮ ಪಂಚಾಯತಿಗಳು ಹಾಗು ೧೯೩೩ ಜನವಸತಿಯಿರುವ ಹಳ್ಳಿಗಳೂ ಇವೆ. ೨೦೧೧ರ ಜನಗಣತಿಯ ಪ್ರಕಾರ, ರಾಜಸ್ಥಾನ ರಾಜ್ಯದ ಸಾಕ್ಷರತೆಯ ಪ್ರಮಾಣವು ಶೇಕಡಾ ೬೬.೧ ಇದ್ದರೆ, ಬಾರ್ಮೇರ್ ಜಿಲ್ಲೆಯಲ್ಲಿ ಅದರ ಪ್ರಮಾಣವು ಶೇಕಡಾ ೫೬.೫ರಷ್ಟು ಇತ್ತು. ಈ ಜಿಲ್ಲೆಯಲ್ಲಿ ಗಂಡಸರ ಹಾಗು ಹೆಂಗಸರ ಸಾಕ್ಷರತಾ ಪ್ರಮಾಣವು (ಕ್ರಮವಾಗಿ, ಶೇಕಡಾ ೭೦.೯ ಹಾಗು ೪೦.೬) ರಾಜ್ಯದ ಗಂಡಸರು ಹಾಗು ಹೆಂಗಸರ ಸರಾಸರಿ ಸಾಕ್ಷರತೆಯ (ಕ್ರಮವಾಗಿ, ಶೇಕಡಾ ೭೯.೨ ಹಾಗು ೫೨.೧) ಪ್ರಮಾಣಕ್ಕಿಂತ ಕಡಿಮೆ ಇದೆ. ಈ ಜಿಲ್ಲೆಯಲ್ಲಿ ಶಿವ ವಿಭಾಗದ ಹೆಂಗಸರ ಸಾಕ್ಷರತಾ ಪ್ರಮಾಣವು ಜಿಲ್ಲೆಯ ಸರಾಸರಿಗಿಂತಲೂ ಕಡಿಮೆ, ಅಂದರೆ, ಶೇಕಡಾ ೩೮.೧೨ರಷ್ಟು ಇರುವುದನ್ನು ದಾಖಲೆಗಳು ತೋರಿಸುತ್ತವೆ. ಇಲ್ಲಿ ಲಿಂಗಾನುಪಾತವು ಅತಿ ಕಡಿಮೆ ಇದ್ದು (ಪ್ರತಿ ಸಾವಿರ ಪುರುಷರಿಗೆ ೮೬೩ ಈ ವಿಭಾಗದ ಸರಾಸರಿಯಾದರೆ, ಬಾರ್ಮೇರ್ ಜಿಲ್ಲೆಯಲ್ಲಿ ಲಿಂಗಾನುಪಾತವು ಸರಾಸರಿ ೯೦೨ ಇದೆ). ಈ ಎರಡೂ ಸಂಗತಿಗಳು ಕಳವಳಕಾರಿಯಾಗಿವೆ.

ಬಾರ್ಮೇರ್ ವಿಭಾಗವು ಶಾಲೆಯ ವಿಚಾರವಾಗಿ ಎದುರಿಸುತ್ತಿರುವ ಸವಾಲುಗಳು ಅದರ ಭೌಗೋಳಿಕ ಸ್ಥಾನ, ಜೀವನೋಪಾಯ ಹಾಗು ಶಿಕ್ಷಣ ನೀತಿಗಳಿಗೆ ಸಂಬಂಧಿಸಿದೆ.

೧. ಇಲ್ಲಿ ಸಾಗುವಳಿ ಭೂಮಿ ಹಾಗು ಜೀವನೋಪಾಯದ ಅವಕಾಶಗಳೆರಡೂ ಬಹು ಪರಿಮಿತ. ಶಿವ ವಿಭಾಗದ ಒಟ್ಟು ಭೂಪ್ರದೇಶದ ಶೇಕಡಾ ೪೯.೧೧ರಷ್ಟು ಮಾತ್ರ ಬೇಸಾಯಕ್ಕೆ ಯೋಗ್ಯವಾಗಿದೆ ಹಾಗು ಅದರ ಕೇವಲ ಶೇಕಡಾ ೦.೬೨ರಷ್ಟು ಭಾಗ ಮಾತ್ರ ನೀರಾವರಿ ಜಮೀನಾಗಿದೆ. (ಭಾರತ ಸರ್ಕಾರ, ೨೦೧೪). ಇಲ್ಲಿನ ಗ್ರಾಮಗಳು ಇಂದಿರಾ ಗಾಂಧಿ ಕಾಲುವೆಯಲ್ಲಿ ನೀರು ಕಾಣುವುದೇ ವಿರಳ. ಮಳೆಕೊಯ್ಲು ವಿಧಾನವನ್ನು ಅಳವಡಿಸಿಕೊಂಡಿರುವ ಶಾಲೆಗಳ ಸಂಖ್ಯೆಯೂ ಅಷ್ಟೇನೂ ದೊಡ್ಡದಲ್ಲ. ಆದರೆ ಮಳೆಯ ಅಭಾವದಿಂದ ಈ ಪ್ರದೇಶದ ಜನರು ವರ್ಷದುದ್ದಕ್ಕೂ ಕುಡಿಯುವ ನೀರಿನ ಕೊರತೆಯನ್ನು ಅನುಭವಿಸುತ್ತಾರೆ.

೨. ಶಾಲೆಗಳು ನಿರ್ಜನ ಪ್ರದೇಶಗಳಲ್ಲಿದ್ದು, ಅಂಗಡಿಗಳು ಕಾಣಸಿಗುವುದು ವಿರಳ. ಶಿಕ್ಷಣವಿಭಾಗವು ಮಧ್ಯಾಹ್ನದ ಬಿಸಿಯೂಟಕ್ಕೆ ಏನಿರಬೇಕು ಎಂದು ಗೊತ್ತುಮಾಡಿದ್ದರೂ ಶಾಲಾಮಕ್ಕಳಿಗೆ ಬಹುತೇಕ ದಲಿಯಾ ಅಥವಾ ಕಿಚಡಿಯನ್ನು ಊಟಕ್ಕೆ ಬಡಿಸಲಾಗುತ್ತಿದ್ದು, ಪೌಷ್ಟಿಕಾಂಶಗಳ ಕೊರತೆಯ ಪ್ರಶ್ನೆ ಕಾಡುತ್ತಿದೆ. ಇಂತಿದ್ದೂ, ಮಕ್ಕಳನ್ನು ಶಾಲೆಯು ಆಕರ್ಷಿಸುತ್ತಿರುವುದಕ್ಕೆ ಕಾರಣ ಕೆಲವೊಮ್ಮೆ ಶಾಲೆಯ ಬಿಸಿಯೂಟವು ಅವರ ದಿನದ ಒಂದೇ ಊಟವಾಗಿರುತ್ತದೆ ಎಂಬುದೇ ಆಗಿದೆ.

೩. ಇಲ್ಲಿನ ಜನಸಂಖ್ಯೆ ಎಷ್ಟು ವಿರಳವಾಗಿದೆಯೆಂದರೆ, ಶಿಕ್ಷಣ ಹಕ್ಕು ಕಾಯ್ದೆಯು ನಿಗದಿಪಡಿಸುವ ಮಾನದಂಡದ ಪ್ರಕಾರ ಪ್ರತಿ ಕಿಲೋಮೀಟರಿಗೂ ಒಂದು ಶಾಲೆ ತೆರೆಯುವುದು ಇಲ್ಲಿ ಅರ್ಥರಹಿತ, ಆದ್ದರಿಂದ, ಒಂದು ಸಾರ್ವಜನಿಕ ಶಾಲೆಯು ಅನೇಕ ಸಣ್ಣ ಗ್ರಾಮಗಳಿಗೆ (ಧಣಿ) ಶಿಕ್ಷಣ ಪೂರೈಸುವಂತಾಗಿದೆ. ಇಲ್ಲಿನ ಶಾಲೆಗಳಿಗೆ ಪಕ್ಕಾ ರಸ್ತೆಗಳಾಗಲೀ, ಸಾರ್ವಜನಿಕ ಸಾರಿಗೆ ವ್ಯವಸ್ಥೆಯಾಗಲೀ ಇಲ್ಲ. ಹೀಗಾಗಿ, ದೂರದ ಹಳ್ಳಿಗಳಿಂದ ಮಕ್ಕಳು ಸುಡುವ ಮರಳಿನ ಮೇಲೆ ಬರಿಗಾಲಲ್ಲಿ ನಡೆದು ಬರಬೇಕಾಗುತ್ತದೆ. ಬೇಸಿಗೆಯಲ್ಲಿ ೫೦ ಡಿಗ್ರಿ ಸೆಂಟಿಗ್ರೇಡ್ ತಾಪಮಾನದಲ್ಲಿ ಇಲ್ಲಿನ ಸನ್ನಿವೇಶವನ್ನು ಊಹಿಸಲೂ ಸಾಧ್ಯವಿಲ್ಲ.

೪. ಈ ಪ್ರದೇಶದಲ್ಲಿ ಜಾತಿಗಳ ಶ್ರೇಣಿವ್ಯವಸ್ಥೆ ಹಾಗು ಜಾತ್ಯಾಧಾರಿತ ತಾರತಮ್ಯಗಳು ಎಷ್ಟು ಬಲವಾಗಿವೆಯೆಂದರೆ, ಶಾಲೆಗಳಲ್ಲಿ ಮಕ್ಕಳು ತಮ್ಮತಮ್ಮ ಜಾತಿಗನುಗುಣವಾದ ತಟ್ಟೆಗಳಲ್ಲಿ ಮಾತ್ರ ಊಟ ಮಾಡಬೇಕಾಗುವ ಪರಿಸ್ಥಿತಿ ಇದ್ದು ಯಾರೂ ಇದರೊಂದಿಗೆ ತಕರಾರು ತೆಗೆಯುವ ಸಾಹಸ ಮಾಡುವುದಿಲ್ಲ. ಬಾಣಸಿಗನೂ ಈ ಪ್ರದೇಶದ ಸಮುದಾಯದ ಪ್ರಬಲ ಜಾತಿಯಿಂದಲೇ ಬಂದವನಾಗಿರುತ್ತಾನೆ.

೫. ಮೇಲ್ಜಾತಿಯ ಹೆಣ್ಣುಮಕ್ಕಳು ತಮ್ಮ ಮನೆಯಿಂದಾಚೆ ಹೋಗಿ ಕೆಲಸ ಮಾಡಲು ಅನುಮತಿ ಸಿಗುವುದು ವಿರಳ. ಆದ್ದರಿಂದ ಶಾಲೆಗಳಲ್ಲಿ ಅಡುಗೆಯವರು ಬಹುತೇಕ ಗಂಡಸರೇ ಆಗಿದ್ದು, ಅವರ ವರಮಾನ ತೀರ ಅತೃಪ್ತಿಕರವಾಗಿರುತ್ತದೆ (ಸಾಮಾನ್ಯವಾಗಿ, ವಾರಕ್ಕೆ ಆರು ದಿನದಂತೆ ೧೦೦ರಿಂದ ೧೨೦ ಮಕ್ಕಳಿಗೆ ಒಂದು ಹೊತ್ತು ಅಡುಗೆ ಮಾಡಲು ತಿಂಗಳಿಗೆ ೧೦೦೦ ರುಪಾಯಿ ದೊರೆಯುತ್ತದೆ). ಈ ಕಾರಣದಿಂದ ಬಾಣಸಿಗರು ಪದೇ-ಪದೇ ಗೈರುಹಾಜರಾಗುವ ಸಂಭವವಿದ್ದು, ಆಗ ಶಿಕ್ಷಕರೇ ಅಡುಗೆ ಮಾಡುವ ಕೆಲಸವನ್ನೂ ನಿಭಾಯಿಸಬೇಕಾಗುತ್ತದೆ.

೬. ಈ ಗ್ರಾಮೀಣ ಶಾಲೆಗಳಲ್ಲಿ ಮಹಿಳಾ ಶಿಕ್ಷಕರಿರುವುದು ವಿರಳ. ಇದಕ್ಕೆ ಮುಖ್ಯ ಕಾರಣಗಳೆಂದರೆ (i) ಹೆಣ್ಣುಮಕ್ಕಳಿಗೆ ಶಿಕ್ಷಣ ದೊರೆಯದೇ ಇರುವುದು (ii) ಶಾಲೆಗಳು ನಿರ್ಜನ ಪ್ರದೇಶಗಳಲ್ಲಿರುವುದು ಹಾಗು (iii) ಮುಖ್ಯ ರಸ್ತೆಗಳಿಂದ ಅವು ದೂರದಲ್ಲಿದ್ದು, ಸಾರಿಗೆ ಸಂಪರ್ಕ ಇರದಿರುವುದು. ಆದ್ದರಿಂದ ಹೆಣ್ಣುಮಕ್ಕಳು ಪ್ರಾಥಮಿಕ ಶಿಕ್ಷಣದ ಬಳಿಕ ಅಥವಾ ಅದಕ್ಕಿಂತಲೂ ಮೊದಲೇ ಶಾಲೆತೊರೆಯುವುದು ಸರ್ವೇ ಸಾಮಾನ್ಯ.

೭. ಕೆಲವು ಶಾಲೆಗಳಲ್ಲಿ ಶಿಕ್ಷಕರು ದಿನನಿತ್ಯ ಶಾಲೆ ಮುಗಿದ ಬಳಿಕ ಮರಳ ಮೇಲೆ ಬೈಕ್ ಓಡಿಸಿಕೊಂಡು ಸಮೀಪದ ಹಳ್ಳಿ ಸೇರಿಕೊಳ್ಳಲು ಆಗದಿರುವುದರಿಂದ ಹಾಗು ಈ ಹಳ್ಳಿಗಳಲ್ಲಿ ಬಾಡಿಗೆಗೆ ವಸತಿ ವ್ಯವಸ್ಥೆ ದೊರೆಯದೇ ಇರುವುದರಿಂದ ಅವರು ಶಾಲಾ ಆವರಣದಲ್ಲೇ ಬಿಡಾರ ಹೂಡುವ ಪರಿಸ್ಥಿತಿ ಇದೆ.

**ಬಾರ್ಮೇರಿನಲ್ಲಿ ನೀತಿ ಉಪಕ್ರಮಗಳು**

ಬಾರ್ಮೇರಿನಲ್ಲಿ ನೀತಿ ಉಪಕ್ರಮಗಳು ಈ ಕೆಳಗಿನಂತಿವೆ:

೧. ನೀರಿನ ಅಭಾವದಿಂದಾಗಿ ಅಂಧಕಾರದ ವಲಯವೆಂದೇ ಕುಖ್ಯಾತವಾಗಿರುವ ಬಾರ್ಮೇರ್ ವಿಭಾಗಕ್ಕೆ ನೇಮಕಗೊಂಡ ಶಿಕ್ಷಕರನ್ನು ಕೆಲಸದಲ್ಲಿ ಉಳಿಸಿಕೊಳ್ಳಲು ಸರ್ಕಾರವು ವರ್ಗಾವಣೆಗಳ ಮೇಲೆ ನಿರ್ಬಂಧ ಹೇರಿದೆ.

೨. ಸರ್ಕಾರಿ ಶಾಲೆಯ ಮುಖ್ಯ ಶಿಕ್ಷಕರು ಸಾಮಾನ್ಯವಾಗಿ ಸಂಪರ್ಕಾಧಿಕಾರಿಯ ಸ್ಥಾನವನ್ನು ವಹಿಸಿಕೊಂಡಿದ್ದು, ಅವರು ಸ್ಥಳೀಯ ಸಮುದಾಯದ ಜನಗಣತಿಗೆ ಸಂಬಂಧಿಸಿದ ಮಾಹಿತಿ ಕಲೆ ಹಾಕಿ ಅದನ್ನು ಸ್ಥಳೀಯ ಆಡಳಿತ ಯಂತ್ರಕ್ಕೆ ಮೇಲಿಂದ ಮೇಲೆ ಪೂರೈಸುವ ಜವಾಬ್ದಾರಿ ಹೊತ್ತಿರುತ್ತಾರೆ. ಶಿಕ್ಷಕನಿಗೆ ಇದು ಕಾಲಾವಕಾಶ ಬೇಡುವ ಪ್ರಕ್ರಿಯೆ. ೩೦೦ಕ್ಕೂ ಮಿಕ್ಕು ಶಾಲೆಗಳಿರುವ ಇಡೀ ಶಿವ ವಿಭಾಗದಲ್ಲಿ, ಶಿಕ್ಷಣನೀತಿಗೆ ಅನುಗುಣವಾಗಿ, ಶೈಕ್ಷಣಿಕ ಕಾರ್ಯನಿರ್ವಹಣಾ ಸಿಬ್ಬಂದಿಯ ಸಂಖ್ಯೆಯು ಅತಿ ಕಡಿಮೆಯಿದ್ದು, ಕೇವಲ ಏಕೈಕ ಕ್ಷೇತ್ರ ಶಿಕ್ಷಣಾಧಿಕಾರಿ (BEO) ಹಾಗು ಏಕೈಕ ಸಂಪನ್ಮೂಲ ವ್ಯಕ್ತಿಗಳಿದ್ದಾರೆ.

೩. ಸರ್ಕಾರಿ ಸಾರ್ವಜನಿಕ ಶಾಲೆಗಳಲ್ಲಿ ಕೇವಲ ಪುಸ್ತಕಗಳನ್ನು ರಾಜ್ಯ ಶಿಕ್ಷಣ ಇಲಾಖೆಯು ಪೂರೈಸುತ್ತದೆ. ಅಂಗಡಿಗಳು ಅಷ್ಟಾಗಿ ಇರದ, ಸಾರಿಗೆ ವ್ಯವಸ್ಥೆ ಕಳಪೆಯಾಗಿರುವ ಹಳ್ಳಿಗಳಲ್ಲಿ ಶಾಲಾ ಸಮವಸ್ತ್ರ ಪೂರೈಕೆ ಆದ್ಯತೆಯ ವಿಷಯವಾಗದೇ ಇರುವುದು ನಿಜಕ್ಕೂ ಅಚ್ಚರಿ ತರುವ ವಿಚಾರ.

೪. ವಿಕೇಂದ್ರೀಕೃತಗೊಂಡ ಶೈಕ್ಷಣಿಕ ಆಡಳಿತದ ವ್ಯವಸ್ಥೆಯಲ್ಲಿ ನಿರೀಕ್ಷಿಸಬಹುದಾದ ಕಾರ್ಯಾಚರಣೆಯ ಅಂಶಗಳು ಇಲ್ಲಿ ಕಾಣೆಯಾಗಿವೆ. ಬಹುತೇಕ ಶಾಲೆಗಳಲ್ಲಿ ಶಾಲಾ ನಿರ್ವಹಣಾ ಸಮಿತಿಯು (School Management Committee -SMC) ಕ್ರಿಯಾಶೀಲವಾಗಿಯೇ ಇಲ್ಲ.

೫. ಈ ಪ್ರದೇಶವು ಬೇಸಿಗೆಯಲ್ಲಿ ಆಹಾರದ ಬಿಕ್ಕಟ್ಟನ್ನು ಎದುರಿಸುವುದನ್ನು ಗಮನದಲ್ಲಿರಿಸಿ ಶಾಲೆಗಳು ಮಧ್ಯಾಹ್ನದ ಬಿಸಿಯೂಟದ ವ್ಯವಸ್ಥೆಯನ್ನು ಸರ್ಕಾರದ ನೀತಿಗೆ ಅನುಗುಣವಾಗಿ ಮಕ್ಕಳ ಬೇಸಿಗೆ ರಜಕ್ಕೂ, ವಿಸ್ತರಿಸಿದೆ. ಆದರೆ, ಬೇಸಿಗೆಯ 40-50°C ಧಗೆಯಲ್ಲಿ ಮಕ್ಕಳು ಊಟಕ್ಕಾಗಿ ಕಾದ ಮರಳ ಮೇಲೆ ನಾಲ್ಕರಿಂದ ಐದು ಕಿಲೋಮೀಟರ್ ಬರಿಗಾಲಲ್ಲಿ ನಡೆದುಬರುವುದನ್ನು ಊಹಿಸಲೂ ಆಗದು!!

**ಸಶಸ್ತ್ರ ಸಂಘರ್ಷಕ್ಕೆ ತುತ್ತಾದ ಪ್ರದೇಶಗಳಲ್ಲಿ ಶಾಲಾ-ಕಲಿಕೆ**

ಸಶಸ್ತ್ರ ಸಂಘರ್ಷಕ್ಕೆ ತುತ್ತಾದ ಬಹುತೇಕ ಪ್ರದೇಶಗಳಲ್ಲಿ, "ಶಾಲೆ ತೊರೆಯುವ ಮಕ್ಕಳ ಅತ್ಯಧಿಕ ಜಮಾವಣೆಗೆ ಬಡತನ ಹಾಗು ಸಂಘರ್ಷಗಳೆರಡರ ಸಂಯೋಗವು ಪ್ರಬಲತರ ಕಾರಣವಾಗುತ್ತದೆ" (ಸ್ಮಿತ್, ೨೦೧೦). ಸಾಮಾನ್ಯವಾಗಿ ಶಿಕ್ಷಣವು "ಒಳಿತು ಮಾಡುವ ಶಕ್ತಿ" ಎಂದು ಪರಿಗಣಿತವಾಗಿದ್ದರೂ, ಸಂಶೋಧನೆಯು, "ಸಂಘರ್ಷವು ಶಿಕ್ಷಣದ ಲಾಭಗಳನ್ನು ವಿಕೃತಗೊಳಿಸಿ ಇನ್ನೂ ಹೆಚ್ಚಿನ ಅಪಾಯ ತಂದೊಡ್ಡುತ್ತದೆ" ಎಂದು ತಿಳಿಸುತ್ತದೆ (ನಿಕೊಲಾಯ್, ೨೦೦೩ ಸಂಘರ್ಷದ ವಲಯದಲ್ಲಿ ಶಾಲಾ ಕಟ್ಟಡಗಳನ್ನು ಸೇನೆ ಅಥವಾ ಕಾವಲುಪಡೆಯು ಆಶ್ರಯ ಸ್ಥಾನಗಳನ್ನಾಗಿ ಬಳಸಬಹುದಾದ್ದರಿಂದ ಇವು ಸಂಘರ್ಷದ ಕಾಲದಲ್ಲಿ ದಾಳಿಗೆ ತುತ್ತಾಗಿ ಶಾಲೆಗಳು ಸುರಕ್ಷಿತವಲ್ಲದೇ ಇರಬಹುದು. ಇದರಿಂದ ಮಕ್ಕಳು ಹಾಗು ಶಿಕ್ಷಕರಿಬ್ಬರೂ ಆಪತ್ತಿಗೆ ಗುರಿಯಾಗುತ್ತಾರೆ. ದೇಶದ ಜಮ್ಮು-ಕಾಶ್ಮೀರ, ಆಂಧ್ರಪ್ರದೇಶ, ಛತ್ತಿಸಘಡ, ಜಾರ್ಖಂಡ್, ಒಡಿಶಾ, ಪಶ್ಚಿಮಬಂಗಾಳ, ಅಸ್ಸಾಂ, ಮಣಿಪುರ ಹಾಗು ತ್ರಿಪುರ ರಾಜ್ಯಗಳ ಕೆಲವು ಭಾಗಗಳಲ್ಲಿ ಈ ಅಪಾಯವಿರುವುದು ನಿಜವೂ ಹೌದು.

**ಛತ್ತೀಸಗಢದ ದಾಂತೇವಾಡದ ಶಾಲೆಗಳು ಹಾಗು ನೀತಿ ಉಪಕ್ರಮಗಳು**

ತನ್ನ ಸಾಮಾಜಿಕ-ರಾಜಕೀಯ ಸಮಸ್ಯೆಗಳಿಂದಾಗಿ ಛತ್ತೀಸಗಢದ ದಾಂತೇವಾಡವು ಕುಖ್ಯಾತವಾಗಿದೆ. ೨೦೧೧ರ ಜನಗಣತಿಯ ಪ್ರಕಾರ ಈ ಜಿಲ್ಲೆಯ ಗ್ರಾಮೀಣ ಪ್ರದೇಶದ ಪರಿಶಿಷ್ಟ ಪಂಗಡದ ಸಾಕ್ಷರತಾ ಪ್ರಮಾಣವು ಶೇಕಡಾ ೨೯.೩೩ರಷ್ಟು ಇತ್ತು. ಇಲ್ಲಿನ ೧೩೮ ಗ್ರಾಮಗಳಲ್ಲಿ ಸಾಕ್ಷರತೆಯು ಶೇಕಡಾ ೧೧ರಿಂದ ೨೦ರವರೆಗೆ ಇದ್ದು, ಇಂತಹ ಗ್ರಾಮಗಳು ಇಲ್ಲಿನ ಒಟ್ಟು ಗ್ರಾಮಗಳ ಶೇಕಡಾ ೨೩.೩೯ರಷ್ಟಿವೆ. ಹಾಗು, ಈ ಗ್ರಾಮಗಳ ಜನಸಂಖ್ಯೆಯು ಇಡೀ ಜಿಲ್ಲೆಯ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯ ಶೇಕಡಾ ೨೩.೯೧ರಷ್ಟಿದೆ. ಅಷ್ಟೇ ಅಲ್ಲದೆ, ಇಲ್ಲಿನ ಹನ್ನೊಂದು ಗ್ರಾಮಗಳಲ್ಲಿ ಪರಿಶಿಷ್ಟ ಪಂಗಡಗಳ ನಡುವಿನ ಶೇಕಡಾವಾರು ಸಾಕ್ಷರತಾ ಪ್ರಮಾಣವು ಸೊನ್ನೆಯಾಗಿದೆ (ಜನಗಣತಿ ಕಾರ್ಯಾಚರಣೆ ನಿರ್ದೇಶನಾಲಯ, ೨೦೧೪). ಈ ಜಿಲ್ಲೆಯ ಅನೇಕ ಗ್ರಾಮಗಳು ಸಶಸ್ತ್ರ ಸಂಘರ್ಷದ ಪಿಡುಗಿಗೆ ತುತ್ತಾಗಿದ್ದು ಶಾಲೆಗಳು ಶೈಕ್ಷಣಿಕ ವರ್ಷದ ಬಹುತೇಕ ಭಾಗ ಮುಚ್ಚಿರುತ್ತವೆ. ಇಂತಹ ಸ್ಥಳಗಳಲ್ಲಿ ಮಕ್ಕಳ ಶಿಕ್ಷಣದ ಸ್ಥಿತಿಗತಿಗಳನ್ನು ಯಾರಾದರೂ ಊಹಿಸಬಹುದು. ಸಂಘರ್ಷದ ನಿಮಿತ್ತ ಅನೇಕ ಮಕ್ಕಳು ಅನಾಥರಾಗುತ್ತಿದ್ದು, ಅನೇಕರು ಶಾಲೆಯಿಂದ ಹೊರಗುಳಿಯಬೇಕಾಗುತ್ತದೆ. ಶಾಲೆಗೆ ಹೋಗುವ ವಯಸ್ಸಿನ ಮಕ್ಕಳು ಯಾವುದೇ ಪ್ರತಿಕ್ರಿಯೆ ತೋರದೆ ಶಾಲೆಯಿಂದ ಹೊರಗುಳಿಯುವ ಹಾಗು ಆಕ್ರಮಣಕ್ಕೆ ಈಡಾಗಬಹುದಾದ ಅಪಾಯವನ್ನು ಗಮನಿಸಿ ಛತ್ತೀಸಗಢ ಸರ್ಕಾರವು ಕೆಲವು ಅಪೂರ್ವ ನೀತಿ ಉಪಕ್ರಮಗಳನ್ನು ಜಾರಿಮಾಡಿದೆ. ಅವುಗಳಲ್ಲಿ ಕೆಲವು:

೧. ರಾಜ್ಯ ಸರ್ಕಾರವು ಹುಡುಗರು ಮತ್ತು ಹುಡುಗಿಯರ ವಸತಿಶಾಲೆಗಾಗಿ "ಪೋಟಾ ಕ್ಯಾಬಿನ್" ಶಾಲೆಗಳು (Pota Cabin schools) ಎಂದೇ ಕರೆಯಲ್ಪಡುವ ಪ್ರತ್ಯೇಕ ಪೂರ್ವರಚಿತ ಕಟ್ಟಡಗಳನ್ನು ಸ್ಥಾಪಿಸಿದೆ. ಇವುಗಳನ್ನು ಕಳಚಿ ಒಂದೆಡೆಯಿಂದ ಮತ್ತೊಂದೆಡೆಗೆ ಸುಲಭವಾಗಿ ಸ್ಥಳಾಂತರಿಸಬಹುದಾಗಿದೆ. ೮ನೇ ತರಗತಿಯವರೆಗೆ ಸರ್ಕಾರವೇ ಮಕ್ಕಳ ಶಿಕ್ಷಣದ ಎಲ್ಲಾ ಖರ್ಚುವೆಚ್ಚ ನೋಡಿಕೊಂಡು, ಬಳಿಕ ಅವರನ್ನು ಹತ್ತಿರದ ಸಾರ್ವಜನಿಕ ಶಾಲೆಗೆ ಮಾಧ್ಯಮಿಕ ಶಿಕ್ಷಣಕ್ಕಾಗಿ ಸ್ಥಳಾಂತರಿಸುತ್ತದೆ.

೨. ರಾಷ್ಟ್ರೀಯ ಹೆದ್ದಾರಿ ೧೬ರಲ್ಲಿ ಸಿಗುವ ಗೀದಮ್ ತಾಲೂಕಿನಲ್ಲಿರುವ ಶಿಕ್ಷಣ ನಗರಿಯು ಸರ್ಕಾರದ ಅನನ್ಯ ಉಪಕ್ರಮಗಳಲ್ಲಿ ಒಂದು. ಸರ್ಕಾರದ ಶೈಕ್ಷಣಿಕ ಉಪಕ್ರಮಗಳಿಗಾಗಿಯೇ ಮೀಸಲಾಗಿರುವ ವಿಸ್ತಾರವಾದ ಈ ಪ್ರದೇಶವು ಯಾವುದೇ ಸಂದರ್ಶಕರ ಗಮನ ಸೆಳೆಯುವುದರಲ್ಲಿ ಸಂದೇಹವಿಲ್ಲ.

೩. ಈ ಶಿಕ್ಷಣ ನಗರಿಯಲ್ಲಿ "ಆಸ್ಥಾ" (Aastha) ಶಾಲೆಯು ಶಿಕ್ಷಣದ ವಿವಿಧ ಪಾರ್ಶ್ವಗಳ ದೃಷ್ಟಿಕೋನಗಳನ್ನು ಒಗ್ಗೂಡಿಸಿದೆ. ಸದ್ಯಕ್ಕೆ ಛತ್ತೀಸಗಢ ರಾಜ್ಯದಲ್ಲಿನ ಸಶಸ್ತ್ರ ಸಂಘರ್ಷದ ಪಿಡುಗಿಗೆ ಸಿಲುಕಿದ ಕುಟುಂಬಗಳ ಸುಮಾರು ೮೦೦ ಹುಡುಗ-ಹುಡುಗಿಯರಿಗೆ ಈ ನಗರಿಯು ಶಿಕ್ಷಣ ನೀಡುತ್ತಿದೆ. ಮಕ್ಕಳ ಎಲ್ಲ ಅವಶ್ಯಕತೆಗಳನ್ನೂ ಈ ಶಾಲೆಯು ಪೂರೈಸುವುದಾದರೂ, ಇಲ್ಲಿನ ಮೂಲಸೌಕರ್ಯಗಳು ಹಾಗು ಶಾಲಾ ಆಚರಣೆಗಳು "ಪೋಟಾ ಕ್ಯಾಬಿನ್" ಶಾಲೆಗಳದ್ದಕ್ಕಿಂತ ವಿಭಿನ್ನವಾಗಿದೆ. ಇಲ್ಲಿ ಶಿಕ್ಷಣ ಮಾಧ್ಯಮವು ಆಂಗ್ಲಭಾಷೆಯಾಗಿದ್ದು, ಪಾಶ್ಚಾತ್ಯ ಮಾದರಿಯ ಸಮವಸ್ತ್ರಗಳು ಹಾಗು ತಾಂತ್ರಿಕವಾಗಿ ಸುಸಜ್ಜಿತ ತರಗತಿಗಳು ಇಲ್ಲಿನವಿಶೇಷ.

೪. ಆಸ್ಥಾದಿಂದ ಸ್ವಲ್ಪವೇ ದೂರದಲ್ಲಿ ಅಂಗವಿಕಲ ಮಕ್ಕಳಿಗಾಗಿ "ಸಕ್ಷಮ್" ಎಂಬ ವಸತಿಶಾಲೆ ಇದ್ದು, ಇಲ್ಲಿ ೧೭೦ ಮಕ್ಕಳು ಕಲಿಯುತ್ತಿದ್ದಾರೆ. ವಾಕ್, ಶ್ರವಣ ಹಾಗು ದೃಷ್ಟಿ ಶಕ್ತಿ ವಿಹೀನರಿಗೆ ಮತ್ತು ಮಾನಸಿಕ ಅಸ್ವಸ್ಥರಿಗೆ ಬೇಕಾದ ಎಲ್ಲಾ ಮೂಲಸೌಕರ್ಯಗಳಿಂದ ಈ ಶಾಲೆಯು ಸುಸಜ್ಜಿತವಾಗಿದೆ. ವಾರದ ಮೂರು ದಿನ ಈ ಮಕ್ಕಳು ಮಾಮೂಲಿ ಶಾಲೆಗಳಿಗೆ ಹೋಗುತ್ತಿದ್ದು, ತಮ್ಮ ಶಾಲಾ ಆವರಣದ ವಿಶೇಷ ತರಗತಿಗಳ ಬಳಕೆಯನ್ನು ಉಳಿದ ಮೂರು ದಿನಕ್ಕೆ ಸೀಮಿತವಾಗಿಸಿದ್ದಾರೆ. ಅಂಗವಿಕಲ ಮಕ್ಕಳು ಔಪಚಾರಿಕ ಶಾಲೆಯ ವಾತಾವರಣಕ್ಕೆ ಹೊಂದಿಕೊಳ್ಳುವಂತೆ ಅವರನ್ನು ಅಣಿಮಾಡುವುದೇ ಈ ಶಾಲೆಯ ಉದ್ದೇಶವಾಗಿದೆ. ಅಂಗವಿಕಲ ಮಕ್ಕಳಿಗೆ ಬೇಕಿರುವ ಎಲ್ಲ ವಿಶೇಷ ಸೌಕರ್ಯಗಳು ಹಾಗು ಮೂಲಸೌಲಭ್ಯಗಳಿಂದ ಈ ಶಾಲೆ

ಸುಸಜ್ಜಿತವಾಗಿದೆ.

**ಪ್ರಶ್ನೆಗಳೊಂದಿಗೆ ಮುಕ್ತಾಯ**

೧. ನೈಸರ್ಗಿಕ ಪ್ರಕೋಪಗಳಿಗೆ, ಸಶಸ್ತ್ರ ಸಂಘರ್ಷದ ಪೀಡೆಗೆ ಒಳಗಾದ ಪ್ರದೇಶಗಳಲ್ಲಿ ಮಕ್ಕಳ ಶಾಲಾ ಕಲಿಕೆಯು ಭಂಗಗೊಳ್ಳುವುದು ಸಾಮಾನ್ಯ. ಆದರೆ ಈ ಅಡ್ಡಿಯು ದೇಶದ ಗಮನ ಸೆಳೆಯದೇ ಇರುವುದಕ್ಕೆ ಇಂತಹ ಘಟನೆಗಳು ಅಡಿಗಡಿಗೆ ಆಗುತ್ತಿರುವುದೇ ಭಾಗಶಃ ಕಾರಣ ಎನ್ನಬಹುದು. ತತ್ಪರಿಣಾಮವಾಗಿ ಮಕ್ಕಳ ಮಾನಸಿಕ ಆರೋಗ್ಯ ಹಾಗು ಕಲಿಕಾ ಪ್ರಕ್ರಿಯೆಗಳ ಮೇಲೆ ಆಗುವ ಪರಿಣಾಮವು ಕಟ್ಟಕಡೆಗೆ ಯಾವುದೇ ಪರಿಹಾರ ಕಾಣದೆ ಉಳಿಯುತ್ತದೆ. ಶಾಲಾ ಕಲಿಕೆಯಲ್ಲಿ ಮತ್ತೆ-ಮತ್ತೆ ಭಂಗ ಬರುವುದರಿಂದ ತೊಂದರೆಗೆ ಸಿಲುಕುವ ಈ ಮಕ್ಕಳು ಎಂದಾದರೂ ಶಿಕ್ಷಣದಲ್ಲಿ "ನಿಷ್ಪಕ್ಷಪಾತ"ತೆಯನ್ನು ಅನುಭವಿಸಿಯಾರೇ? ಅವರ ಶಿಕ್ಷಣದ ಹಕ್ಕು ಹೆಚ್ಚೆಂದರೆ ೮ನೇ ಇಯತ್ತೆಗೇ ಸೀಮಿತವೆ?

೨. ಇಲ್ಲಿನ ಶಾಲೆಗಳು ಎದುರಿಸುವ ಆಪತ್ತುಗಳನ್ನು, ಅವು ಸಂಘರ್ಷದ ಬಲಿಪಶುಗಳಾಗುವ ಸಾಧ್ಯತೆಗಳನ್ನು ಹಾಗು ಸರ್ಕಾರದ ಸೂಕ್ತ ನೀತಿ ಹಸ್ತಕ್ಷೇಪಕ್ಕೆ ಇರುವ ಅಗತ್ಯಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಅತಿದೊಡ್ಡ ಸವಾಲೆಂದರೆ: ಶಾಲೆಗಳ ಭೌಗೋಳಿಕ ಸ್ಥಾನಗಳನ್ನು ಸೂಚಿಸುವ ನಕ್ಷೆಗಳ ಅಭಾವ, ಶಾಲೆಗಳಿಗೆ ರಸ್ತೆ-ಸಂಪರ್ಕ ಇಲ್ಲದಿರುವುದು, ಸುತ್ತಮುತ್ತಲಿನ ಸಮುದಾಯ ಹಾಗು ಈ ಪ್ರದೇಶದ ಭೌಗೋಳಿಕ ಪರಿಸರಗಳು. ಇಂತಹ ಸವಾಲಿನ ಪ್ರದೇಶಗಳಲ್ಲಿ ಅವುಗಳ ಸನ್ನಿವೇಶಕ್ಕೆ ವಿಶಿಷ್ಟವಾದ ಸಮಸ್ಯೆಗಳಿಗೆ ಪರಿಹಾರ ಸಾಧ್ಯವಾಗಿಸುವಂತಹ ಶಿಕ್ಷಣನೀತಿಯ ಚೌಕಟ್ಟನ್ನು ರೂಪಿಸಲು ಬೇರೆಬೇರೆ ರಾಜ್ಯಗಳಲ್ಲಿ ಇರುವ ಇದೇ ಮಾದರಿಯ ಶಾಲೆಗಳ ಬಗ್ಗೆ ಇನ್ನೂ ಆಳವಾದ ಅಧ್ಯಯನ ಪ್ರಯೋಜನಕ್ಕೆ ಬರಬಹುದು. ಕೆಲವು ಜಾಗಗಳಲ್ಲಿ GPSಗಳ ಬಳಕೆ ಸಹಾಯಕ್ಕೆ ಬರಬಹುದಾದರೂ, ಉಳಿದೆಡೆ ಮಾನವ ನಿರ್ಮಿತ ನಕ್ಷೆಗಳ ಮೊರೆಹೋಗದೇ ವಿಧಿಯಿಲ್ಲ. ಈ ಶಾಲೆಗಳ ನಕ್ಷೆ ತಯಾರಿಸುವಲ್ಲಿ ಮೊದಲ ಹೆಜ್ಜೆ ಇಡುವವರಾರು? ಮತ್ತು ಯಾವಾಗ?

೩. ಸಂಶೋಧಕರಾಗಲೀ, ನಾಗರಿಕ ಸಮಾಜದ ಸಂಘಟನೆಗಳಾಗಲೀ ಇಂತಹ ಸವಾಲಿನ ಪ್ರದೇಶಗಳ ಶಾಲೆಗಳಿಗೆ ಭೇಟಿ ಇತ್ತು ಅಲ್ಲಿನ ಸಮಸ್ಯೆಗಳನ್ನು ಅರಿಯುವುದು ವಿರಳ. ಮಾನವನಿರ್ಮಿತ ಹಾಗು ನೈಸರ್ಗಿಕ ಪ್ರಕೋಪಗಳ ಕಾರಣದಿಂದ ಉಂಟಾಗುವ ಶಾಲಾ-ಸಂಬಂಧಿತ ಸಮಸ್ಯೆಗಳ ಬಗ್ಗೆ ಗಮನಹರಿಸಲು ರಾಜಕೀಯ ಸಂಕಲ್ಪದ ಕೊರತೆ ಸಾಮಾನ್ಯವಾಗಿ ಕಂಡುಬರುತ್ತದೆ. ಸಂಶೋಧಕರ ಹಾಗು ನಾಗರಿಕ ಸಮಾಜದ ಸಂಘಟನೆಗಳ ಗಮನವನ್ನು ಇಂತಹ ಪ್ರದೇಶಗಳಿಗೆ ಸೆಳೆದು, ದೀರ್ಘಕಾಲಿಕ ಪ್ರಯೋಜನಗಳನ್ನು ತಲುಪಿಸುವ ಗುರಿಯುಳ್ಳ ಅರ್ಥಪೂರ್ಣ ನೀತಿ-ಪರಿಹಾರವು ಇಲ್ಲಿನ ಮಕ್ಕಳಿಗೆ ದೊರಕುವಂತೆ ಮಾಡುವುದಾದರೂ ಎಂತು ?

*ಉತ್ತರಕಾಶಿ ಹಾಗು ಬಾರ್ಮೇರ್‌ಗಳ ಮಾಹಿತಿ ಕಲೆ ಹಾಕುವಲ್ಲಿ ಸಹಾಯ ಮಾಡಿದ MA ಶಿಕ್ಷಣ ಕಾರ್ಯಕ್ರಮದ (೨೦೧೪-೧೬ ಮತ್ತು ೨೦೧೫-೧೭ರ ತಂಡಗಳು) ವಿದ್ಯಾರ್ಥಿಗಳಾದ ಸೂರ್ಯ, ವಿಶಾಲಾ, ಅಕಿಬ್, ಸ್ವಪ್ನಿಲ್. ಯೋಗೇಂದ್ರ, ಮೊಹಿಸಿನ್, ಶಾಲಿನಿ, ಏಕತಾ ಹಾಗು ಪಂಕಜ್ ಅವರಿಗೆ ವಿಶೇಷ ಧನ್ಯವಾದಗಳು.*

ಪರಾಮರ್ಶನ

1. Boyden, J., Jo de Berry, Thomas Feeny and Jason Hart (2002). Children Affected by Armed Conflict in South Asia. UNICEF.
2. Dangwal, D. P., Neetu Chauhan, Mayukhee Ghosh and Tamoghno Ghosh (2014). Preliminary Slope Stability Assessment of the Recent Disaster Affected Areas of Uttarkashi District, Uttarakhand. Kolkata: Geological Survey of India.
3. Das, P. K. (2013). 'The Himalayan Tsunami'- Cloudburst, Flash

Flood & Death Toll: A Geographical Postmortem. IOSR Journal Of Environmental Science, Toxicology And Food Technology, 7(2), 33-45
4. Directorate of Census Operations, Chhattisgarh, Government of India (2014). Census of India 2011, Series 23, Part XIIA.
5. Government of Uttarakhand. (2015). State Profile. Retrieved from http://uk.gov.in/pages/display/115-state-profile
6. Ministry of Home Affairs, Government of India (2009). National Policy on Disaster Management 2009. Retrieved from http://www.ndma.gov.in/images/guidelines/national-dm-policy2009.pdf
7. National Institute of Disaster Management (NIDM) (2014). India Disaster Report 2013. Delhi: Ministry of Home Affair, Government of India.
8. Nicolai, Susan and Carl Triplehorn (2003). The role of education in protecting children in conflict. London: Overseas Development Institute.
9. Pragya (2013). Devastating Flash Floods in Uttarakhand and Himachal Pradesh. Retrieved from https://www.pragya.org/doc/flashflood_update.pdf
10. Smith, A. (2010). The influence of education on conflict and peace building, Background paper prepared for the Education for All Global Monitoring Report 2011 The Hidden Crisis: Armed conflict and education, Paris: UNESCO.
11. The Times of India (Oct 25, 2014). Hudhud killed 46 in Andhra Pradesh, 21 lakh families hit. Retrieved from timesofindia.indiatimes.com

**ಶಾಶ್ವತಿ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಅಧ್ಯಾಪಕ ವರ್ಗದಲ್ಲಿದ್ದಾರೆ. ಸವಾಲಿನ ಪ್ರದೇಶಗಳಲ್ಲಿ ಸರ್ಕಾರಿ ಸಾರ್ವಜನಿಕ ಶಾಲಾ ವ್ಯವಸ್ಥೆ ಮತ್ತು ಶಿಕ್ಷಣ ನೀತಿಗಳು ಅವರ ಆಸಕ್ತಿಯ ಪ್ರಧಾನ ಕ್ಷೇತ್ರಗಳಾಗಿವೆ. ಅವರು ಭೌತಿಕ ಸಂಪರ್ಕದ ಸಮಸ್ಯೆಗಳಿಂದ, ನೈಸರ್ಗಿಕ ಪ್ರಕೋಪ ಹಾಗು ಸಶಸ್ತ್ರ ಸಂಘರ್ಷಗಳಿಂದ ಬಳಲುತ್ತಿರುವ ದೇಶದ ಇಂತಹ ಸವಾಲಿನ ಪ್ರದೇಶಗಳಲ್ಲಿನ ಶಾಲೆಗಳ ನಕ್ಷೆಯ ತಯಾರಿಯಲ್ಲಿ ತೊಡಗಿದ್ದು, ಅವರನ್ನು saswati@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: ಕುಶಲ್

ಪರಿಶೀಲನೆ : ಚಂದ್ರಶೇಖರ್ ಮಂಡೆಕೋಲು